ಪಿ. ಯಶೋದಾ ರಾಜಶೇಖರಪ್ಪ

# ಚಿತ್ರದುರ್ಗ ಜಿಲ್ಲೆಯ ವಿಶಿಷ್ಟ ವೀರಮಾಸ್ತಿ ಶಿಲ್ಪ

ಚಿತ್ರದುರ್ಗ ಜಿಲ್ಲೆಯ ವೀರಗಲ್ಲುಗಳು, ಮಾಸ್ತಿ ಕಲ್ಲುಗಳು ಅತ್ಯಂತ ವೈವಿಧ್ಯಮಯವಾದವು. ಅಂತಹವುಗಳಲ್ಲಿ ಒಂದು ಇತ್ತೀಚೆಗೆ ಕಂಡು ಬಂದ ಸ್ಮಾರಕ ತವಂದಿ ಎನ್ನುವ ಗ್ರಾಮಕ್ಕೆ ಸೇರಿದ್ದು. ಇದನ್ನು "ವೀರ ಮಾಸ್ತಿ ಶಿಲ್ಪ"ದ ಗುಂಪಿಗೆ ಸೇರಿಸಬಹುದು. ಏಕೆಂದರೆ ಇದರಲ್ಲಿ ವೀರಗಲ್ಲು ಹಾಗೂ ಮಾಸ್ತಿಕಲ್ಲು ಈ ಎರಡರ ಲಕ್ಷಣಗಳೂ ಮೇಳೈಸಿವೆ.

ತವಂದಿಯು ಹಿರಿಯೂರಿನಿಂದ ಸುಮಾರು 10 ಕಿ.ಮೀ ದೂರದಲ್ಲಿರುವ ಒಂದು ಪುಟ್ಟ ಗ್ರಾಮ. ಊರ ಕೆರೆಯ ಸುತ್ತ ಮುತ್ತ ಇರುವ ಭಿನ್ನಗೊಂಡ ಗುಡಿಗಳನ್ನೂ ವೀರಗಲ್ಲು ಮಾಸ್ತಿಕಲ್ಲುಗಳಂತಹ ಅವಶೇಷಗಳನ್ನೂ ಗಮನಿಸಿದರೆ ಹಿಂದೆ ಅದೊಂದು ಚಾರಿತ್ರಿಕ ಮಹತ್ವವುಳ್ಳ ಸ್ಥಳವಾಗಿರಬೇಕು ಯುದ್ಧ ನಡೆದ ಭೂಮಿ ಆಗಿರಬೇಕು – ಎನಿಸುತ್ತದೆ. ಶಾಸನಗಳಲ್ಲಿ ಈ ಗ್ರಾಮವನ್ನು 'ತವಂದಿ' ಎಂದೂ ಜನಪದ ಸಾಹಿತ್ಯದಲ್ಲಿ 'ತಾವಂದಿ' ಎಂದೂ ಕರೆಯಲಾಗಿದೆ. ಈಗ ಇದನ್ನು 'ತವಂದಿ' ಎಂದು ಕರೆಯಲಾಗುತ್ತಿದೆ.

ಈ ಲೇಖನದಲ್ಲಿ ವರ್ಣಿಸಲಾಗಿರುವ ವೀರಮಾಸ್ತಿ ಶಿಲ್ಪವು ತವಂದಿಯ ಕೆರೆಯ ಕೆಳಗಿರುವ ಸೂರಗೊಂಡನಹಳ್ಳಿ ನಿವಾಸಿಗಳಾದ ಶ್ರೀ ಕರಿಬಸಯ್ಯ ಎಂಬುವರ ತೋಟದಲ್ಲಿ ಇದೆ. ಹಿಂದೆ ಇದಕ್ಕೆ 'ರೇವಕ್ಕನ ತೋಟ' ಎಂದು ಕರೆಯುತ್ತಿದ್ದುದಾಗಿ ತಿಳಿದುಬರುತ್ತದೆ. ಈ ಅಪೂರ್ವವಾದ ಹೃದಯಸ್ಪರ್ಶಿ ಶಿಲ್ಪ ಕವಿಹೃದಯದ ಶಿಲ್ಪಿಯೊಬ್ಬನ ಶ್ರೇಷ್ಠ ಕಲಾಕೃತಿ ಎಂದು ಪರಿಗಣಿಸಬಹುದು. ಈ ಶಿಲ್ಪದ ಅಡ್ಡಗಲ ಆರೂವರೆ ಅಡಿ, ಎತ್ತರ ಎರಡು ಅಡಿ ಮತ್ತು ದಪ್ಪ ಒಂದೂವರೆ ಅಡಿ ಇದೆ.

## ಶಿಲ್ಪದ ಚಿತ್ರಣ

ಈ ಸುಂದರ ಶಿಲ್ಪ ಒಟ್ಟು ಮೂರು ಹಂತಗಳಲ್ಲಿ ಪಟ್ಟಿಕೆಗಳಲ್ಲಿ ಕೆತ್ತಲ್ಪಟ್ಟಿದೆ. ಸ್ಪಷ್ಟ ವಿವರಗಳನ್ನೊಳಗೊಂಡ ಇದು ಯಾವುದೋ ಭೀಕರ ಯುದ್ಧ ನಡೆದದ್ದನ್ನೂ, ನಂತರ ಸಂಭವಿಸಿದ ಹೃದಯವಿದ್ರಾವಕ ಘಟನೆಗಳನ್ನೂ, ಹೃದಯಂಗಮ ವಾಗಿ ಹೇಳುತ್ತಿರುವಂತೆ ಭಾಸವಾಗುತ್ತದೆ. ಅದರೆ ಕೆಳಗಿನ ಹಂತದಲ್ಲಿ ಯುದ್ಧ ನಡೆದುದರ ಸೂಚನೆ ನೀಡುವ ಎರಡು ದೃಶ್ಯಗಳಿವೆ. ಮೊದಲನೆಯ ದೃಶ್ಯ–ಸರ್ವಾಲಂಕೃತವಾದ ಕುದುರೆಯ ಮೇಲೆ ಕುಳಿತ ವೀರನೊಬ್ಬ ಬರ್ಚಿ ಅಥವಾ ಬಿಚ್ಚು ಕತ್ತಿ ಹಿಡಿದು ರಣೋತ್ಸಾಹದಿಂದ ಯುದ್ಧಕ್ಕೆ ಹೊರಟಿದ್ದಾನೆ. ಹಿಂದೆ ಛತ್ರಿ ಹಿಡಿದ ಭಟ ಮುಂದೆ ಬಿಲ್ಲು ಬಾಣ ಹಿಡಿದು ಕುರುರೆಯ ಜೊತೆಯಲ್ಲಿ ನಡೆಯುತ್ತಿರುವ ಇನ್ನೊಬ್ಬ ನೆಚ್ಚಿನ ಬಂಟ ಇದ್ದಾರೆ. ಇದರದೇ ಮುಂದುವರಿಕೆ ಮುಂದಿನ ದೃಶ್ಯ – ಆ ವೀರ ಕುದುರೆಯಿಂದ ಇಳಿದು ಶತ್ರುವಿನೊಡನೆ ಯುದ್ಧ ಮಾಡುತ್ತಾ ಶತ್ರುವನ್ನು ಕತ್ತಿಯಿಂದ ತುಂಡರಿಸುತ್ತಿದ್ದಾನೆ. ಶತ್ರುವಿನ ಕತ್ತಿಯ ಏಟು ಇವನ ಕುತ್ತಿಗೆಯ ಮೇಲೂ ಬಿದ್ದಿದೆ. ಶತ್ರುವಿನ ಗಡ್ಡ ವೇಷಭೂಷಣ ಗಮನಿಸಿದರೆ ಅವು ಮುಸಲ್ಮಾನ ನಿರಬೇಕು ಎನಿಸುತ್ತದೆ. ಇಲ್ಲಿ ಇವರ ಮತ್ತು ಪರಿವಾರದ ಉಡುಗೆ ತೊಡುಗೆ ಮುಂತಾದ ಸೂಕ್ಷ್ಮ ವಿವರಗಳ ಚಿತ್ರಣವನ್ನು ಕಾಣಬಹುದು.

ಇನ್ನು ಇದರ ಮೇಲಿನ ಪಟ್ಟಿಕೆಯು ಈ ಶಿಲ್ಪದ ಹೃದಯಸದೃಶ ಭಾಗ ಎನ್ನಬಹುದು. ಅಷ್ಟೇ ಅಲ್ಲ, ಹೃದಯಸ್ಪರ್ಶಿ ಘಟನೆಯೊಂದನ್ನು ಚಿತ್ರಿಸುವ ಇದು ರಾಜಾಸ್ಥಾನದ ಸಮೂಹ ಸ್ತ್ರೀ ಸಹಗಮನ ಜೋಹರ್ ಪದ್ಧತಿಯನ್ನು ನೆನಪಿಗೆ ತರುತ್ತದೆ. ಇಲ್ಲಿ ಕೆಳಗೆ ಚಿತ್ರಿಸಿದ ಯುದ್ಧದಲ್ಲಿ ಹೋರಾಡಿ ಮಡಿದ ವೀರನ ಏಳು ಜನ ಪತ್ನಿಯರು ಜೀನು ಹಾಕಿದ ಏಳು ಅಲಂಕೃತ ಕುದುರೆಗಳ ಮೇಲೆ ಸರ್ವಾಲಂಕೃತರಾಗಿ ಒಂದು ಕೈಯಲ್ಲಿ ನಿಂಬೆಹಣ್ಣು(?) ಇನ್ನೊಂದು ಕೈಯಲ್ಲಿ ಕನ್ನಡಿ ಹಿಡಿದು ಕುಳಿತು ಮೆರವಣಿಗೆಯಲ್ಲಿ ಸಾಗುತ್ತಿದ್ದಾರೆ. ಎಲ್ಲರಿಗಿಂತ ಮುಂದಿನ ಕುದುರೆಯನ್ನು ಹಿಡಿದು ಪುರುಷನೊಬ್ಬ ಇವರನ್ನು ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಿದ್ದಾನೆ. ಈತ ಬಹಶಃ ಇವರ ರಕ್ತಸಂಬಂಧಿಯಾಗಿದ್ದು ಈ ಸ್ಮಾರಕ ಮಾಡಿಸಿದ ವ್ಯಕ್ತಿ ಇರಬಹುದು. ಮೆರವಣಿಗೆ ಅಗ್ನಿಕುಂಡದತ್ತ ಅಥವಾ ಚಿತೆಯತ್ತ ಬರುತ್ತಿದೆ. ಇದರ ಮುಂದುವರಿಕೆ ದೃಶ್ಯವಂತೂ ಮನಕರಗಿಸುವಂತಹುದು. ಆ ಏಳೂ ಜನ ಸ್ತ್ರೀಯರು ಕುದುರೆ

ಯಿಂದಿಳಿದು ಒಬ್ಬರಿಗೊಬ್ಬರು ಬಿಡಲಾರದವರಂತೆ ಕೈ ಕೈ ಹಿಡಿದುಕೊಂಡಿದ್ದು ತೆಕ್ಕೆಹಾಕಿಕೊಂಡು ಅಗ್ನಿಕುಂಡದಲ್ಲಿ ಅಥವಾ ಚಿತೆಯಲ್ಲಿ ಬೀಳಲು ಧಾವಿಸುತ್ತಿದ್ದಾರೆ. ಧಾವಿಸುವ ಅವರ ಹೆಜ್ಜೆಗಳಲ್ಲಿ ತಮ್ಮ ಪತಿಯನ್ನು ಆದಷ್ಟು ಬೇಗೆ ಸೇರಬೇಕೆನ್ನುವ ಕಾತರ ಇರುವಂತೆ ಕಾಣುತ್ತಿದೆ. ಅಗ್ನಿಕುಂಡ ಅಥವಾ ಚಿತೆಯು ಬಾಳೆ ಕಂಬಗಳಿಂದ ಅಲಂಕೃತ ಗೊಂಡಿದೆ. ಅಗ್ನಜ್ವಾಲೆಗಳು ಧಗಧಗಿಸುತ್ತಿವೆ. ಒಬ್ಬಳಂತೂ ಆಗಲೆ ಒಂದು ಕಾಲನ್ನು ಮುಂಚಾಚಿ ಇನ್ನೇನು ಬೀಳುತ್ತಿದ್ದಾಳೆ ಎನ್ನುವ ಹಾಗೆ ಇದೆ. ಅವರು ತೆಕ್ಕೆ ಹಾಕಿಕೊಂಡಿರುವುದನ್ನು ನೋಡಿದರೆ ಅವರೆಲ್ಲ ಸೋದರಿಯರೇನೋ ಎನಿಸುವಂತಿದೆ.

ಎಲ್ಲಕ್ಕೂ ಮೇಲಿನ ಹಂತದ ದೃಶ್ಯವು ಅಗಲದಲ್ಲಿ ಕೆಳಗಿನ ಎರಡೂ ಭಾಗಗಳಿಂತ ಕಿರಿದಾಗಿದ್ದು ಒಂದೇ ಒಂದು ದೃಶ್ಯದ ವಿಸ್ತಾರದ ಚಿತ್ರವಾಗಿದೆ. ಇದರಲ್ಲಿ ಕೆಳಗೆ ಚಿತೆಗೆ ಹಾರಿದ ಆ ಏಳು ಜನ ಪತ್ನಿಯರು ತಮ್ಮ ಪತಿಯೊಡನೆ ಕೈಲಾಸದಲ್ಲಿದ್ದಾರೆ. ಶಿವಲಿಂಗ ನಂದಿಯ ಪಕ್ಕದಲ್ಲಿ ಆ ಸ್ತ್ರೀಯರು ಪಕ್ಕ ಪಕ್ಕದಲ್ಲಿ ಸಾಲಾಗಿ, ಪದ್ಮಾಸನದಲ್ಲಿ, ಭಕ್ತಿಯಿಂದ ಕೈ ಮುಗಿದು ಕುಳಿತಿದ್ದಾರೆ. ಕೊನೆಯಲ್ಲಿ ಅವರ ಪತಿಯೂ ಅದೇ ಭಂಗಿಯಲ್ಲಿ ಕುಳಿತಿದ್ದಾನೆ. ಲಿಂಗ ಪೂಜಕ ಗಡ್ಡಧಾರಿ ಆಚಾರ್ಯನೊಬ್ಬ ಇವರಿಗೆ ಪ್ರಸಾದ ನೀಡುವ ಭಂಗಿಯಲ್ಲಿದ್ದಾನೆ. ಇನ್ನೊಂದು ಪಕ್ಕದಲ್ಲಿ ಲಿಂಗಕ್ಕೆ ಧೂಪಾರತಿ ಬೆಳಗುತ್ತಿರುವ ಪುರುಷಾಮೃಗ, ವೀಣೆ ನುಡಿಸುತ್ತಾ ಇರುವ ಪಕ್ಷಿಪುರುಷನ ಚಿತ್ರ ಮತ್ತು ಶಹನಾಯಿಯಂತಹ ಮಂಗಳವಾದ್ಯ ನುಡಿಸುತ್ತಿರುವ ಪುರುಷನ ಚಿತ್ರ ಇವೆ. ಈ ಶಿಲ್ಪಭಾಗ ಯುದ್ಧದಲ್ಲಿ ಮಡಿದ ಪುರುಷ ಆತನ ಪತ್ನಿಯರು ಶಿವಸಾಯುಜ್ಯ ಹೊಂದಿದರೆಂಬ ಅಂಶವನ್ನು ತಿಳಿಸುತ್ತದೆ.

## ಶಿಲ್ಪದ ಇತಿಹಾಸ?

ಆದರೆ ಶಿಲ್ಪದಲ್ಲಿ ಎಲ್ಲಿಯೂ ಲಿಪಿ ಇಲ್ಲದಿರುವುದರಿಂದ ಇದರ ಇತಿಹಾಸ ಅಲಭ್ಯವೆಂದೇ ಹೇಳಬೇಕು. ಶಿಲ್ಪಶೈಲಿಯನ್ನು ಗಮನಿಸಿದರೆ ಇದು ವಿಜಯನಗರದ ಅಂತ್ಯದ ಅಥವಾ ಪಾಳೆಯಗಾರರ ಕಾಲದ್ದೆಂದು ಹೇಳಬಹುದು. ಶಿಲ್ಪದ ಸ್ವರೂಪ ಮತ್ತು ಅಲ್ಲಿಯ ಜನರಿಂದ ಸಂಗ್ರಹಿಸಿದ ಮಾಹಿತಿಗಳಿಂದ ಅದರ ಸಂಗತಿಗಳನ್ನು ಸದ್ಯಕ್ಕೆ ಇಷ್ಟು ಹೇಳಬಹುದು: ವಿಜಯನಗರ ಅಥವಾ ಪಾಳೆಯಗಾರರ ಕಾಲದಲ್ಲಿ ರಾಜಪ್ರತಿನಿಧಿಯೋ ಪ್ರಾಂತಾಧಿಕಾರಿಯೋ ನಾಯಕ ವಂಶಸ್ಥನೋ ಆದವನೊಬ್ಬ ಮುಸಲ್ಮಾನರ ಜೊತೆಯಲ್ಲಿ ಯುದ್ಧ ಮಾಡಿ ಮಡಿದಿರಬೇಕು. ಆಗ ಆತನ ಏಳು ಜನ ಪತ್ನಿಯರು ಅವನ ಜೊತೆಯಲ್ಲಿ ಸಹಗಮನ ಮಾಡಿ 'ಶಿವ ಸಾಯುಜ್ಯ' ಹೊಂದಿರಬೇಕು. ಈ ಸ್ಮಾರಕವಿರುವ ತೋಟವನ್ನು ಕಾಯುವ ಹುಡುಗನೊಬ್ಬ ಈ ಶಿಲ್ಪವನ್ನು ಪಕ್ಕದ ಹಳ್ಳಿಯ ಗೊಲ್ಲ ಜನಾಂಗದ ಕೆಲವರು ವರ್ಷಕ್ಕೊಮ್ಮೆ ಬಂದು ಪೂಜಿಸಿ ಹಾಡಿ ಹೋಗುತ್ತಾರೆ ಎಂದೂ ಇದರಲ್ಲಿ ಅವರ ಮೂಲ ಪುರುಷನೊಬ್ಬ ಇದ್ದಾನೆಂದು ಹೇಳುತ್ತಾರೆಂತಲೂ ಹೇಳಿದನು. ತೋಟದ ಯಜಮಾನರಾದ ಕರಿಬಸಯ್ಯನವರು ತಮಗೆ ತಿಳಿದದ್ದನ್ನು ಹೇಳುತ್ತಾ ಪಾಳೆಯಗಾರರಿಗೂ ಗೊಲ್ಲರಿಗೂ ಮುಸಲ್ಮಾನರಿಗೂ ಯುದ್ಧ ವಾಯಿತೆಂದೂ ಅದರಲ್ಲಿ ಅವರೆಲ್ಲರ ದಂಡುಗಳಲ್ಲಿ ಒಬ್ಬರಿಗೊಬ್ಬರು ಹೊಡೆದಾಡಿಕೊಂಡು ಸತ್ತರೆಂದೂ ಅದಕ್ಕೇ ಇದನ್ನು "ದಂಡಿನಕಲ್ಲು" ಎಂದು ಕರೆಯುತ್ತಾರೆಂದೂ ತಿಳಿಯಿತು. ಇದರಿಂದ ತಿಳಿದು ಬರುವ ಅಂಶವೆಂದರೆ ಮುಸಲ್ಮಾನರೊಂದಿಗಿನ ಒಂದು ಕಾಳಗದಲ್ಲಿ ನಾಯಕನೊಬ್ಬನಿಗೆ ಗೊಲ್ಲ ಜನಾಂಗದ ವೀರನೊಬ್ಬ ಸಹಾಯ ಮಾಡಿರಬೇಕು. ಆತ ಬಹುಶಃ ಪಾಳೆಯಗಾರನಿಗೆ ನೆಚ್ಚಿನ ಬಂಟನಾಗಿದ್ದು ಶಿಲ್ಪದ ಕೆಳಪಟ್ಟಿಕೆಯಲ್ಲಿರುವ ಯುದ್ಧದ ದೃಶ್ಯದಲ್ಲಿ ಇರುವ ವೀರಪುರುಷನ ಮುಂಭಾಗದಲ್ಲಿರುವ ಕುಬ್ಜ ಆಕಾರದಲ್ಲಿ ಚಿತ್ರಿಸಿರುವ ವ್ಯಕ್ತಿ ಇರಬೇಕು ಅಥವಾ ಕುದುರೆಯ ಮೇಲೆ ಕುಳಿತ ವೀರ ಪುರುಷನಿದ್ದರೂ ಇರಬೇಕು. ಒಟ್ಟಿನಲ್ಲಿ ಈ ವಿವರಗಳಿಗೆ ತಕ್ಕ ಸಮರ್ಥನೆ ಬೇಕು.

ತವಂದಿಯ ಒಂದು ಯುದ್ಧಕ್ಕೆ ಸಂಬಂಧಪಟ್ಟ ಅಂಶವೊಂದು ಜನಪದ ಗೀತೆಯೊಂದರಲ್ಲಿ ಬೆಳಕಿಗೆ ಬಂದಿದೆ. ಬಹುಶಃ ಅದಕ್ಕೂ ಈ ಶಿಲ್ಪಕ್ಕೂ ಯಾವುದಾದರೂ ಸಂಬಂಧ ಇರಬಹುದೋ ಏನೋ ತಿಳಿಯದು. ಶ್ರೀ ಕೃಷ್ಣಮೂರ್ತಿ ಹನೂರು ಅವರು ಸಂಗ್ರಹಿಸಿದ 'ಕತ್ತಾಲ ದಾರಿ ದೂರ' ಎಂಬ ಜನಪದ ಕಥನ ಗೀತೆಗಳ ಸಂಕಲನದಲ್ಲಿ ತವಂದಿಯಲ್ಲಿ ಯುದ್ಧವಾದ ಪ್ರಸಂಗವೊಂದು ಬಂದಿದೆ. ಆ ಹಾಡಿನಲ್ಲಿ ಸತಿ ಹೋದ ತಿಮ್ಮವ್ವನ ಪತಿ ವೀರನಾಗಪ್ಪ ತನ್ನ ವಿವಾಹಕ್ಕೆ ಮುಂಚೆ ಹರ್ತಿಕೋಟೆಯ ಪಾಳೆಯಗಾರ ರಂಗಣ್ಣ ನಾಯಕನ ಪರವಾಗಿ ತವಂದಿಯ ಬೇಡರ ಮೇಲೆ ಯುದ್ಧಕ್ಕೆ ಹೋಗುತ್ತಾನೆ. ಹೋಗುವ ಮುಂಚೆ ದೇವರಲ್ಲಿ ಪ್ರಾರ್ಥಿಸುವ ಕೆಲವು ಪದ್ಯಗಳು ಬರುತ್ತವೆ.

ಉದಾಹರಣೆಗೆ,

ಆರು ಕಾಯಿ ತಂದು ವಡೆದು ಪೂಜೆಯ ಮಾಡಿ
ನಾಳೆ ತಾವಂದಿ ಜಗುಳಾಕೆ
ನಾಳಿ ತಾವಂದಿ ಜಗುಳಕೆ ಬರುತೀನೆ
ಹೂವ ಕೊಡಮ್ಮ ಬಲಗಡಿಗೆ

ಇಂಥ ಕೆಲವು ಪದ್ಯಗಳು ತವಂದಿಯಲ್ಲಿ ಯುದ್ಧವಾಗಿದ್ದರ ಅಂಶವನ್ನು ತಿಳಿಸುತ್ತವೆ. ಈ ಯುದ್ಧದಲ್ಲಿ ನಾಗಣ್ಣ ಗೆದ್ದು ನಾಯಕನ ಹತ್ತಿರ ಚಿನ್ನದ ಸತ್ತಿಗೆ ಭೂಮಿ ಪಡೆದು ಹಿಂದಿರುಗುತ್ತಾನೆ. ಅನಂತರದಲ್ಲಿ ಆತನ ವಿವಾಹ ತಿಮ್ಮವ್ವನ ಜೊತೆಯಲ್ಲಿ ಜರುಗುತ್ತದೆ. ಆ ವೀರನಾಗಣ್ಣ ಬಹುಶಃ ಯುದ್ಧದ ದೃಶ್ಯದ ಕೆಳಪಟ್ಟಿಕೆಯಲ್ಲಿ ಬರುವ ಕುದುರೆಯ ಮೇಲೆ ಕುಳಿತು ವೀರಪುರುಷನ ಮುಂಭಾಗದಲ್ಲಿ ಕುಬ್ಜನ ಹಾಗೆ ಕಾಣಿಸುವ ನಾಯಕನ ನೆಚ್ಚಿನ ಬಂಟನಿರಬೇಕು. ಕುದುರೆಯ ಮೇಲೆ ಕುಳಿತ ವೀರಪುರುಷ ಪಾಳೆಯಗಾರ ನಾಯಕನಿರಬಹುದು ಎನ್ನುವ ಊಹೆಯೂ ಮಾಡುತ್ತದೆ. ಕೆಲವು ಅನುಮಾನಗಳೂ ಬರುತ್ತವೆ. ಯುದ್ಧ ನಡೆದದ್ದು ಮುಸಲ್ಮಾನರ ಜೊತೆಯಲ್ಲಿ ಎಂಬಂತೆ ಕಾಣುತ್ತಿದೆ. ಹೀಗಾಗಿ ಇದರ ಇನ್ನೂ ಹೆಚ್ಚಿನ ವಿವರಗಳನ್ನು ಸಂಗ್ರಹಿಸುವ ನನ್ನ ಪ್ರಯತ್ನ ಮುಂದುವರಿಸಲಿದ್ದೇನೆ.

1991ರ ಜುಲೈನಲ್ಲಿ ಚಿತ್ರದುರ್ಗದಲ್ಲಿ ಜರುಗಿದ ನೇ ವಾರ್ಷಿಕ ಇತಿಹಾಸ ಸಮ್ಮೇಳನದಲ್ಲಿ ಈ ಲೇಖನವನ್ನು ಮಂಡಿಸಿದಾಗ ಪ್ರಸಿದ್ಧ ಸಂಶೋಧಕರಾದ ಡಾ॥ ಚಿದಾನಂದ ಮೂರ್ತಿಯವರು ಈ ಶಿಲ್ಪದ ಬಗ್ಗೆ ಹೇಳುತ್ತಾ "ಕರ್ನಾಟಕದಲ್ಲೇ ಈವರೆಗೂ ತಿಳಿದು ಬಂದಿರುವ ಅತ್ಯಂತ ಹೆಚ್ಚಿನ ವಿವರಗಳಿರುವ ಸುಂದರವೂ ಆದ ವೀರ ಮಾಸ್ತಿ ಶಿಲ್ಪ ಇದಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.

(ಈ ವೀರ ಮಾಸ್ತಿ ಶಿಲ್ಪದ ಇರವನ್ನು ತಿಳಿಸಿ ಸಹಕರಿಸಿದ ಸ್ನೇಹಿತೆಯಾದ ಶ್ರೀಮತಿ ಉಪಾತವನಿಧಿ ಮತ್ತು ಅವರ ಸಹೋದರ ಶ್ರೀ ಲಿಂಗಣ್ಣಯ್ಯನವರಿಗೂ ಮತ್ತು ಈ ಲೇಖನ ಬರೆಯಲು ಪ್ರೋತ್ಸಾಹಿಸಿ ವಿವರ ಸಂಗ್ರಹಿಸಲು ನೆರವಾದ ನನ್ನ ಪತಿ ಶ್ರೀ ಬಿ. ರಾಜಶೇಖರಪ್ಪನವರಿಗೂ ನನ್ನ ಕೃತಜ್ಞತೆಗಳು.)